**ಕರ್ನಾಟಕ ವಿಧಾನ ಪರಿಷತ್ತು**

| | | | |
|---|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1480 |
| 02. | ಸದಸ್ಯರ ಹೆಸರು | : | ಶ್ರೀ ಸುನೀಲ್ ಸುಬ್ರಮಣಿ ಎಂ. ಪಿ. |
| 03. | ಉತ್ತರಿಸುವ ದಿನಾಂಕ | : | 19.03.2020 |
| 04. | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಎಸ್.ಐ. ಮತ್ತು ಅದಕ್ಕೆ ಮೇಲ್ಪಟ್ಟ ಅಧಿಕಾರಿಗಳ ವರ್ಗಾವಣೆಗೆ ಇರುವ ನಿಯಮ ಮತ್ತು ಮಾನದಂಡಗಳೇನು; ಬೆಂಗಳೂರು ನಗರದಲ್ಲಿ ಈ ಮಟ್ಟದ ಅಧಿಕಾರಿಗಳು ಗರಿಷ್ಟ ಎಷ್ಟು ವರ್ಷಗಳ ಕಾಲ ಕಾರ್ಯನಿರ್ವಹಿಸಬಹುದು; | ಪೊಲೀಸ್ ಉಪ ನಿರೀಕ್ಷಕರು ಹಾಗೂ ಅದಕ್ಕಿಂತ ಮೇಲ್ಪಟ್ಟ ಅಧಿಕಾರಿಗಳ ವರ್ಗಾವಣೆಯನ್ನು ಕರ್ನಾಟಕ ಪೊಲೀಸ್ (ತಿದ್ದುಪಡಿ) ಕಾಯ್ದೆ, 2012ರ ಕಲಂ 20(ಎಫ್)ರಲ್ಲಿ ರಚಿಸಲಾಗಿರುವ ಪೊಲೀಸ್ ಸಿಬ್ಬಂದಿ ಮಂಡಳಿಯು ಕೈಗೊಳ್ಳುವ ತೀರ್ಮಾನದಂತೆ ಮಾಡಲಾಗುತ್ತಿದೆ. ಸದರಿ ಅಧಿಕಾರಿಗಳ ವರ್ಗಾವಣೆಗೆ ಕೆಳಕಂಡ ಮಾನದಂಡಗಳನ್ನು ನಿಗದಿಪಡಿಸಲಾಗಿರುತ್ತದೆ.<br>1) ಪಿ.ಐ. ಹುದ್ದೆಯ ವರ್ಗಾವಣೆಯನ್ನು ಪ್ರಧಾನ ಕಛೇರಿಯಲ್ಲಿ ಮತ್ತು ವಲಯ / ಕಮೀಷನರೇಟ್ ವ್ಯಾಪ್ತಿಯ ಒಳಗಿನ ಮತ್ತು ಘಟಕ ವ್ಯಾಪ್ತಿಯ ವರ್ಗಾವಣೆಗಳನ್ನು ಮಾಡಲಾಗುತ್ತದೆ.<br>2) ಪಿ.ಎಸ್.ಐ ಹುದ್ದೆಗಳು 'ಸಿ' ವೃಂದದ ಹುದ್ದೆಗಳಾಗಿದ್ದು, ವಲಯ ಐ.ಜಿ.ಪಿ ನೇತೃತ್ವದ ಹಾಗೂ ಸಂಬಂಧಪಟ್ಟ ಪೊಲೀಸ್ ಆಯುಕ್ತರ ನೇತೃತ್ವದ ಪೊಲೀಸ್ ಸಿಬ್ಬಂದಿ ಮಂಡಳಿಯಲ್ಲಿ ಕೈಗೊಂಡ ನಿರ್ಣಯದನ್ವಯ ವರ್ಗಾವಣೆ ಮಾಡಲಾಗುತ್ತದೆ.<br>3) ವಲಯ / ಜಿಲ್ಲಾ ಮಟ್ಟದ ಸಾರ್ವಜನಿಕ ಹಿತದೃಷ್ಟಿಯ ವರ್ಗಾವಣೆಯನ್ನು ಸರ್ಕಾರದ ವರ್ಗಾವಣೆ ಮಾರ್ಗ ಸೂಚಿಯನ್ವಯ ಮಾಡಲಾಗುತ್ತದೆ.<br>4) ಬೆಂಗಳೂರು ನಗರದಲ್ಲಿ ಪೊಲೀಸ್ ಉಪಾಧೀಕ್ಷಕರು ಮತ್ತು ಪೊಲೀಸ್ ನಿರೀಕ್ಷಕರ ಮಟ್ಟದ ಅಧಿಕಾರಿಗಳು ಸರ್ಕಾರದ ಆದೇಶ ಸಂಖ್ಯೆ:ಒಇ 128 ಪೊಸಇ 2015, ದಿನಾಂಕ: 25.06.2015ರನ್ವಯ ಕಾರ್ಯಕಾರಿಣಿ ಹುದ್ದೆ ಯಲ್ಲಿ 05 ವರ್ಷಗಳ ಗರಿಷ್ಟ ಸೇವೆಯನ್ನು ಸಲ್ಲಿಸ ಬಹುದಾಗಿದೆ. (ಕಾರ್ಯಕಾರಿಣಿ = ಕಾನೂನು ಸುವ್ಯಸ್ಥೆ + ಸಂಚಾರ)<br>5) ಮುಂದುವರೆದಂತೆ ಸರ್ಕಾರದ ಆದೇಶ ಸಂಖ್ಯೆ: ಒಇ 182 ಪೊಸಇ 2018, ದಿನಾಂಕ: 14.11.2018ರಲ್ಲಿ ಪೊಲೀಸ್ ಕಮೀಷನರೇಟ್ ಘಟಕದಲ್ಲಿ ಕಾರ್ಯಕಾರಿಣಿ ಹುದ್ದೆ ಯಲ್ಲಿ 05 ವರ್ಷಗಳ ಸೇವೆ ಸಲ್ಲಿಸಿದ್ದರು ಸಹ ದಕ್ಷ ಅಧಿಕಾರಿಗಳ ಸೇವೆಯನ್ನು ಸಿಸಿಬಿ ಘಟಕಕ್ಕೆ ಪಡೆಯಲು ವಿನಾಯಿತಿ ನೀಡಿ ಆದೇಶಿಸಲಾಗಿರುತ್ತದೆ.<br>6) ಬೆಂಗಳೂರು ನಗರ ಪೊಲೀಸ್ ಆಯುಕ್ತರ ವ್ಯಾಪ್ತಿಯಲ್ಲಿ ಪಿ.ಎಸ್.ಐ ವರ್ಗಾವಣೆಗೆ ಸಂಬಂಧಿಸಿದಂತೆ ಸರ್ಕಾರದ ವರ್ಗಾವಣೆ ಮಾರ್ಗಸೂಚಿ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾಗ-2), ದಿನಾಂಕ: 21.05.2011ರನ್ವಯ ನಡೆಸಲಾಗುತ್ತಿದ್ದು, ಸದರಿ ಆದೇಶದನ್ವಯ ಒಂದು ಠಾಣೆಯಲ್ಲಿ ಪಿ.ಎಸ್.ಐ ಹುದ್ದೆಗೆ 2 ವರ್ಷ ಮತ್ತು ಗರಿಷ್ಟ 3 ವರ್ಷಗಳ ಪದಾವಧಿಯನ್ನು ನಿಗದಿಪಡಿಸಲಾಗಿದೆ. |

| | | |
|---|---|---|
| ಆ) | ಕಳೆದ ಐದು ವರ್ಷಗಳಿಂದ ಬೆಂಗಳೂರು ನಗರದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಸ್.ಐ. ಮತ್ತು ಇದಕ್ಕೆ ಮೇಲ್ಪಟ್ಟ ಅಧಿಕಾರಿಗಳ ಸಂಖ್ಯೆ ಎಷ್ಟು; ಇವರುಗಳು ಬೆಂಗಳೂರಿನಲ್ಲಿಯೇ ಇಷ್ಟು ವರ್ಷಗಳ ಕಾಲ ಸೇವೆ ಸಲ್ಲಿಸಲು ಕಾರಣಗಳೇನು; | ಕರ್ನಾಟಕ ಪೊಲೀಸ್ (ತಿದ್ದುಪಡಿ) ಕಾಯ್ದೆ, 2012ರ ಕಲಂ 20(ಎಫ್)ರನ್ವಯ ಪ್ರಸ್ತುತ ಸೇವೆ ಸಲ್ಲಿಸುತ್ತಿರುವ ಸ್ಥಳಗಳಲ್ಲಿ ಕನಿಷ್ಠ ಒಂದು ವರ್ಷದ ಸೇವೆಯನ್ನು ಪೂರ್ಣಗೊಳಿಸಿಲ್ಲದ ಕಾರಣ ಡಿವೈ.ಎಸ್.ಪಿ. (ಸಿವಿಲ್) ವೃಂದದ 04 ಅಧಿಕಾರಿಗಳು ಹಾಗೂ ಪಿ.ಐ. (ಸಿವಿಲ್) ವೃಂದದ 07 ಅಧಿಕಾರಿಗಳು ಕಳೆದ ಐದು ವರ್ಷಗಳಿಂದ ಬೆಂಗಳೂರು ನಗರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ.<br><br>ಪಿ.ಎಸ್.ಐ ದರ್ಜೆಯ ಅಧಿಕಾರಿಗಳು ಬೆಂಗಳೂರು ನಗರದ ಘಟಕಕ್ಕೆ ನೇಮಕಾತಿ ಹೊಂದಿರುವುದರಿಂದ ಇವರುಗಳನ್ನು ಬೆಂಗಳೂರು ನಗರದಿಂದ ಹೊರಕ್ಕೆ ವರ್ಗಾವಣೆ ಮಾಡಲು ಅವಕಾಶ ಇಲ್ಲದ ಕಾರಣ ಇಲ್ಲೇ ಕಾರ್ಯ ನಿರ್ವಹಿಸುತ್ತಿರುತ್ತಾರೆ. ಆದಾಗ್ಯೂ, ವರ್ಗಾವಣೆ ಮಾರ್ಗಸೂಚಿಯನ್ವಯ 2 ರಿಂದ 3 ವರ್ಷಗಳ ಅವಧಿಯಲ್ಲಿ ಒಂದು ಠಾಣೆಯಿಂದ ಮತ್ತೊಂದು ಠಾಣೆಗೆ ವರ್ಗಾವಣೆ ಮಾಡಲಾಗುತ್ತದೆ.<br><br>ಪಿ.ಎಸ್.ಐ ದರ್ಜೆಯ ಅಧಿಕಾರಿಗಳು ಬೆಂಗಳೂರು ನಗರದಿಂದ ಮತ್ತೊಂದು ವಲಯ / ಕಮೀಷನರೇಟ್‌ಗೆ ವರ್ಗಾವಣೆ ಹೊಂದಲು ಬಯಸಿದಲ್ಲಿ ಸೇವಾ ಜೇಷ್ಠತೆಯನ್ನು ಬಿಟ್ಟು ಕೊಟ್ಟು ವರ್ಗಾವಣೆ ಹೊಂದಲು ಅವಕಾಶ ಕಲ್ಪಿಸಲಾಗಿರುತ್ತದೆ. |
| ಇ) | ಪೊಲೀಸ್ ಅಧಿಕಾರಿಗಳನ್ನು ವರ್ಗಾವಣೆ ಮಾಡುವ ಸಂದರ್ಭಗಳಲ್ಲಿ ಸ್ಥಳಗಳನ್ನು ತೋರಿಸದೆ awaiting for posting ಎಂದು ತೋರಿಸಲು ಕಾರಣಗಳೇನು; ಈ awaiting for posting ಸಂದರ್ಭದಲ್ಲಿ ಈ ಅಧಿಕಾರಿಗಳಿಗೆ ವೇತನ ಭತ್ಯೆಗಳನ್ನು ಯಾರು ಮತ್ತು ಯಾವ ಲೆಕ್ಕ ಶೀರ್ಷಿಕೆಯಿಂದ ನೀಡಲಾಗವುದು? (ಸಂಪೂರ್ಣ ವಿವರ ನೀಡುವುದು) | ಆಡಳಿತಾತ್ಮಕ ಕಾರಣಗಳಿಂದಾಗಿ ಹಾಗೂ ಅನಿವಾರ್ಯ ಸಂದರ್ಭದಲ್ಲಿ ಪೊಲೀಸ್ ಅಧಿಕಾರಿಗಳನ್ನು ವರ್ಗಾವಣೆ ಮಾಡುವ ಸಂದರ್ಭದಲ್ಲಿ awaiting for posting ಎಂದು ತೋರಿಸಲಾಗಿರುತ್ತದೆ. ಸದರಿಯವರ ವೇತನವನ್ನು ಅವರುಗಳಿಗೆ ಸ್ಥಳ ನಿಯುಕ್ತಿಗೊಳಿಸಿದ ನಂತರ ಪೊಲೀಸ್ ಪ್ರಧಾನ ಕಛೇರಿಯಿಂದ ಮಂಜೂರು ಮಾಡಲಾಗುತ್ತದೆ. ಅದನ್ನು ಅವರುಗಳು ಕರ್ತವ್ಯ ನಿರ್ವಹಿಸುವ ಘಟಕಗಳ ಲೆಕ್ಕ ಶೀರ್ಷಿಕೆಯಿಂದ ನೀಡಲಾಗುತ್ತದೆ. |

HD/24/PPA/2020-PS_B

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು